ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ಶಿಕ್ಷಣದ 3 ಟೈಯರ್ ವ್ಯವಸ್ಥೆ ಕುರಿತು

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ)

384 (559) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ 3 ಟೈಯರ್ ಸಿಸ್ಟಂ ವ್ಯವಸ್ಥೆ ಎಂದಿನಿಂದ ಜಾರಿ ಮಾಡಲಾಗಿದೆ ; ಜಾರಿ ಮಾಡಿದ್ದಲ್ಲಿ, ಅದರ ನಿಯಮಗಳೇನು ;

(ಆ) ಪ್ರೌಢ ಶಾಲೆಗಳಲ್ಲಿ ಸ್ನಾತಕೋತ್ತರ ಪದವಿ ಪಡೆದ ಸಹ ಶಿಕ್ಷಕರಿಗೆ ಪದವಿ ಪೂರ್ವ ವಿಭಾಗಕ್ಕೆ ಪದೋನ್ನತಿಯನ್ನು ಏಕೆ ನಿಲ್ಲಿಸಲಾಗಿದೆ; ನಿಲ್ಲಿಸಿದ್ದರೆ ಕಾರಣಗಳೇನು ;

(ಇ) ಇದರಿಂದ ಅನೇಕ ಸ್ನಾತಕೋತ್ತರ ಪದವಿ ಪಡೆದವರು ಯಾವುದೇ ಬಡ್ತಿ ಇಲ್ಲದೆ ನಿವೃತ್ತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದರೆ, ಇದನ್ನು ಸರಿಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮವೇನು ;

(ಈ) 1 ರಿಂದ 5ರವರೆಗೆ ಪ್ರಾಥಮಿಕ, 6-8 ಪ್ರೌಢ ಹಾಗೂ 9-12 ಹಿರಿಯ ಪ್ರೌಢ ಈ ವ್ಯವಸ್ಥೆ ಇದ್ದಾಗ್ಯೂ ಕೂಡ ಇನ್ನೂ ಅನೇಕ ಕಡೆಗೆ 1-7, 8-10 ಹಾಗೂ 11-12 ಜಾರಿಯಲ್ಲಿರುವುದು ನಿಜವೇ ; ಹಾಗೂ ಇನ್ನೂ ಸ್ವತಂತ್ರ ಪದವಿ ಪೂರ್ವ ಕಾಲೇಜುಗಳು ಸತತವಾಗಿ ನಡೆಯುತ್ತಿರುವುದು ಒಂದಕ್ಕೊಂದು ಹೊಂದಾಣಿಕೆ ಇಲ್ಲದೇ ಶಿಕ್ಷಣ ವ್ಯವಸ್ಥೆ ಹದಗೆಟ್ಟಿರುವುದು ನಿಜವೇ ; ನಿಜವಿದ್ದಲ್ಲಿ, ಸರಿಪಡಿಸಲು ತೆಗೆದುಕೊಂಡಿರುವ ಕ್ರಮಗಳೇನು ?